# ಸಮಕಾಲೀನ ಭಾರತದಲ್ಲಿ ಶಾಲಾ ಶಿಕ್ಷಕರ ಪಾತ್ರ ಮತ್ತು ಸವಾಲುಗಳು

**–ಆಸಿಫ್ ಅಖ್ತರ್**

**ಪ್ರಸ್ತಾವನೆ**

ಇಂದು ಪ್ರಪಂಚದ ವಿವಿಧೆಡೆ ವ್ಯಕ್ತವಾಗುತ್ತಿರುವಂತೆ ಸಾಮಾಜಿಕ ಪರಿವರ್ತನೆ ವೇಗವಾಗಿದೆ. ಇದು ಅನೇಕ ವೃತ್ತಿಗಳಲ್ಲಿ ಕಾರ್ಯನಿರ್ವಹಣೆಯ ಆಯಾಮವನ್ನೇ ಬದಲಿಸಲು ನಾಂದಿಯಾಗಿದೆ. ಅವುಗಳಲ್ಲಿ ಶಿಕ್ಷಕ ವೃತ್ತಿ ಕೂಡ ಒಂದು. ಬದಲಾಗುತ್ತಿರುವ ಕಾಲಮಾನದಲ್ಲಿ ಶಿಕ್ಷಕರು ಹೆಚ್ಚಿನ ಜವಾಬ್ದಾರಿಗಳನ್ನು ನಿರ್ವಹಿಸುತ್ತಿದ್ದಾರೆ ಮತ್ತು ತಮ್ಮದೇ ಆದ ನೆಲೆಯನ್ನು ಮತ್ತೊಮ್ಮೆ ಕಟ್ಟಿಕೊಳ್ಳುತ್ತ ಈಗಿನ ಕಾಲದ ಸವಾಲುಗಳನ್ನು ಎದುರಿಸಲು ಸಜ್ಜಾಗುತ್ತಿದ್ದಾರೆ. ನಮ್ಮ ರಾಷ್ಟ್ರದಲ್ಲಿ 1990ರ ದಶಕದಿಂದ ಈಚೆಗೆ ಆಗಿರುವ ಆರ್ಥಿಕ ಪ್ರಗತಿ ಮತ್ತು ತಂತ್ರಜ್ಞಾನದ ಸುಧಾರಣೆಯಿಂದಾಗಿ ಇಂತಹ ಬದಲಾವಣೆಗಳಾಗಿವೆ. ಉದಾರ ಆರ್ಥಿಕ ನೀತಿಯ ಫಲವಾಗಿ ಸಾಮಾಜಿಕ ಸ್ಥಾನಮಾನವೂ ಏರುಗತಿಯಲ್ಲಿರುವುದಕ್ಕೆ ಭಾರತೀಯ ಸಮಾಜ ಸಾಕ್ಷಿಯಾಗಿದೆ. ಯುವ ತಲೆಮಾರಿನ ಮೇಲೆ ಇದರ ಪರಿಣಾಮ ವಿಭಿನ್ನ ರೀತಿಯಲ್ಲಿ ಆಗಿದೆ. ತಮ್ಮ ಪಾತ್ರಗಳಲ್ಲಿ ಆಗುತ್ತಿರುವ ಬದಲಾವಣೆಯನ್ನು ಶೀಘ್ರವಾಗಿ ಗ್ರಹಿಸಿರುವ ಶಿಕ್ಷಕರು, ಈ ಪರಿಸ್ಥಿತಿಯನ್ನು ನಿಭಾಯಿಸುವ ಕಾರ್ಯನೀತಿಯನ್ನು ಅಷ್ಟೇ ಬೇಗ ಅಳವಡಿಸಿಕೊಂಡರು. ಈ ಎಲ್ಲ ಹಿನ್ನೆಲೆಯಲ್ಲಿ ಸಮಕಾಲೀನ ಭಾರತೀಯ ಸಮಾಜದಲ್ಲಿ ಶಿಕ್ಷಕರ ಪಾತ್ರ ಮತ್ತು ಅವರು ಎದುರಿಸುತ್ತಿರುವ ಸವಾಲುಗಳನ್ನು ಅರಿತುಕೊಳ್ಳುವ ಸಣ್ಣ ಪ್ರಯತ್ನವನ್ನು ಈ ಲೇಖನದ ಮೂಲಕ ಮಾಡಲಾಗಿದೆ.

ನಮಗೆಲ್ಲ ತಿಳಿದಿರುವ ಹಾಗೆ ಬೋಧನಾ ವೃತ್ತಿ ಸಂಕೀರ್ಣವಾದುದು. ಒಂದು ನಿಯಂತ್ರಿತ ವ್ಯವಸ್ಥೆಯಲ್ಲಿ ಶಿಕ್ಷಕರು ವಿದ್ಯಾರ್ಥಿಗಳಲ್ಲಿ ಪೂರ್ವನಿರ್ಧರಿತವಾದ ಕಲಿಕೆಯನ್ನು ಅಭಿವೃದ್ಧಿಪಡಿಸುವ ಕೆಲಸವಿದು. ವಿದ್ಯಾರ್ಥಿಗಳಲ್ಲಿ ಅಪೇಕ್ಷಿತವಾದ ಬದಲಾವಣೆ ತರಬೇಕು ಎಂಬುದು ಇದರ ಮೂಲ ಉದ್ದೇಶ. ಒಂದು ಸಾಂಪ್ರದಾಯಿಕ ಚೌಕಟ್ಟಿನಲ್ಲಿ 'ಬೋಧನೆ' ಎನ್ನುವುದು ಶಿಕ್ಷಕ ಕೇಂದ್ರಿತವಾದುದು. ಅಂದರೆ ಶಿಕ್ಷಕರೇ ಜ್ಞಾನದ ಮೂಲ ಮತ್ತು ಆ ಜ್ಞಾನವನ್ನು ಜಡವಾಗಿ ಸ್ವೀಕರಿಸುವವರು ವಿದ್ಯಾರ್ಥಿಗಳು. ಇದರ ಪರಿಣಾಮವಾಗಿ ಶಿಕ್ಷಕರು ಎಂದರೆ ಅಧಿಕಾರಯುತರು ಮತ್ತು ಪ್ರಶ್ನಿಸಲಾಗದವರು ಎಂದು ರೂಢಿಗತವಾಗಿ ಕರೆಯಲ್ಪಡುತ್ತಿದ್ದಾರೆ.

ಕಳೆದ ಕೆಲವು ವರ್ಷಗಳ ಅವಧಿಯಲ್ಲಿ ಶಿಕ್ಷಕರ ಸಾಂಪ್ರದಾಯಿಕ ಪಾತ್ರವನ್ನು ಮರುವ್ಯಾಖ್ಯಾನ ಮಾಡಲಾಗಿದೆ. 2009ರ ಶಿಕ್ಷಕರ ಶಿಕ್ಷಣಕ್ಕಾಗಿರುವ ರಾಷ್ಟ್ರೀಯ ಪಠ್ಯಕ್ರಮದ ಕಾರ್ಯನೀತಿ (NCFTE) ಪ್ರಕಾರ, ಶಿಕ್ಷಕರು ಒಟ್ಟಾರೆ ಕಲಿಕಾ ಪ್ರಕ್ರಿಯೆಯಲ್ಲಿ ಶಿಕ್ಷಣಾರ್ಥಿಗಳನ್ನು ಕೇವಲ ಜ್ಞಾನ ಸ್ವೀಕರಿಸುವ ವಿದ್ಯಾರ್ಥಿಯನ್ನಾಗಿ ನೋಡದೆ ಅವರನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳುವಂತೆ ಮಾಡಬೇಕು. ಶಿಕ್ಷಣಾರ್ಥಿ ಕೇಂದ್ರಿತ, ಚಟುವಟಿಕೆ ಆಧಾರಿತ, ಭಾಗವಹಿಸುವಿಕೆಯ ಮೂಲಕ ಕಲಿಕಾ ಅನುಭವವನ್ನು ಪಡೆಯುವ ಕಾರ್ಯಕ್ರಮಗಳನ್ನು ಆಯೋಜಿಸುವ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ನಾಟಕ, ಕಾರ್ಯಯೋಜನೆಗಳು, ಚರ್ಚೆ, ಸಂಭಾಷಣೆ, ಅವಲೋಕನ, ಕ್ಷೇತ್ರ ಭೇಟಿ, ಉತ್ಪಾದನಾ ಕಾರ್ಯದೊಂದಿಗೆ ಸಮಗ್ರವಾದ ಶೈಕ್ಷಣಿಕ ಕಲಿಕೆ ಇತ್ಯಾದಿ

ಚಟುವಟಿಕೆಗಳು ಈ ಕಲಿಕೆಯಲ್ಲಿ ಒಳಗೊಂಡಿರುತ್ತವೆ. ಡ್ವಯರ್ (1991) ತಮ್ಮ 'ಜ್ಞಾನ ಗಳಿಸುವಿಕೆಗಾಗಿ ತರಗತಿಯ ವಿಧಾನ'ದಲ್ಲಿ ಸೂಚಿಸಿರುವಂತೆ ಇದು ಜ್ಞಾನದ ಬೋಧನೆಗಿಂತ ಮಿಗಿಲಾಗಿ ಜ್ಞಾನದ ಕಟ್ಟುವಿಕೆ ಎಂಬ ಚಿಂತನೆಗೆ ಪೂರಕವಾದುದು. ಈ ಮಾದರಿಯಲ್ಲಿ ಶಿಕ್ಷಕ ಮತ್ತು ವಿದ್ಯಾರ್ಥಿ ಇಬ್ಬರಿಗೂ ಅನ್ವಯವಾಗುವುದು ಸಮನ್ವಯತೆ. ಈ ಕೆಳಗಿನ ಕೋಷ್ಟಕದಲ್ಲಿ ಎರಡೂ ವಿಧಾನಗಳಲ್ಲಿ ಇರುವ ವ್ಯತ್ಯಾಸವನ್ನು ವಿವರಿಸಲಾಗಿದೆ.

| | **ಜ್ಞಾನ ಬೋಧನೆ** | **ಜ್ಞಾನ ಕಟ್ಟುವಿಕೆ** |
|---|---|---|
| ತರಗತಿ ಚಟುವಟಿಕೆ | ಶಿಕ್ಷಕ ಕೇಂದ್ರಿತ (ಬೋಧಕ ಶೈಲಿ) | ಶಿಕ್ಷಣಾರ್ಥಿ ಕೇಂದ್ರಿತ (ಸಂವಹನ) |
| ಶಿಕ್ಷಕರ ಪಾತ್ರ | ವಾಸ್ತವಗಳನ್ನು ತಿಳಿಸುವವ (ಯಾವತ್ತೂ ತಜ್ಞರು) | ಸಮನ್ವಯಕಾರ (ಕೆಲವೊಮ್ಮೆ ಶಿಕ್ಷಣಾರ್ಥಿ) |
| ವಿದ್ಯಾರ್ಥಿಯ ಪಾತ್ರ | ಶ್ರೋತೃ (ಯಾವತ್ತೂ ಶಿಕ್ಷಣಾರ್ಥಿ) | ಸಮನ್ವಯಕಾರ (ಕೆಲವೊಮ್ಮೆ ತಜ್ಞ) |
| ಬೋಧನೆಯ ಪ್ರಾಧಾನ್ಯತೆ | ವಾಸ್ತವಗಳು (ಕಂಠಪಾಠ) | ಸಂಬಂಧಗಳು (ತನಿಖೆ ಮತ್ತು ಶೋಧನೆ) |
| ಜ್ಞಾನದ ಪರಿಕಲ್ಪನೆ | ವಾಸ್ತವಗಳ ಕ್ರೋಢೀಕರಣ | ವಾಸ್ತವಗಳ ರೂಪಾಂತರ |

| | **ಜ್ಞಾನ ಬೋಧನೆ** | **ಜ್ಞಾನದ ಕಟ್ಟುವಿಕೆ** |
|---|---|---|
| ಯಶಸ್ಸಿನ ಪ್ರದರ್ಶನ | ಪ್ರಮಾಣ | ಅರಿವಿನ ಗುಣಾತ್ಮಕತೆ |
| ಮೌಲ್ಯಾಂಕನ | ಮಾದರಿ ಆಧಾರಿತ (ಬಹು ಆಯ್ಕೆ ವಿಷಯಗಳು) | ಮಾನದಂಡ ಆಧಾರಿತ (ವಿಷಯಗಳು ಮತ್ತು ಸಾಧನೆಗಳು) |
| ತಂತ್ರಜ್ಞಾನದ ಬಳಕೆ | ಕಟ್ಟುನಿಟ್ಟಾದ ಶಿಸ್ತು ಮತ್ತು ಅಭ್ಯಾಸ | ಸಂವಹನ (ಸಹಯೋಗ, ಮಾಹಿತಿ ಸಂಗ್ರಹ, ಅಭಿವ್ಯಕ್ತಿ) |

2005ರ ರಾಷ್ಟ್ರೀಯ ಪಠ್ಯಕ್ರಮದ ಕಾರ್ಯನೀತಿಯ ಪ್ರಕಾರ, ಜ್ಞಾನವನ್ನು ಅರ್ಥವತ್ತಾಗಿ ಕಟ್ಟಿಕೊಳ್ಳುವ ರೀತಿಯಲ್ಲಿ ಮಕ್ಕಳ ಕಲಿಕಾ ವಿಧಾನವಿರಬೇಕಾಗಿದ್ದು, ಅದನ್ನು ವ್ಯವಸ್ಥೆ ಮಾಡುವ ಹೊಣೆ ಶಿಕ್ಷಕರದ್ದಾಗಿರುತ್ತದೆ. ಒಂದು ಕಡೆ ಶಿಕ್ಷಕರು ಜ್ಞಾನದ ಸಹ–ರಚನಾಕಾರರಾಗಿಯೂ ಇನ್ನೊಂದು ಕಡೆ ಪಠ್ಯಕ್ರಮ, ಪಠ್ಯಪುಸ್ತಕ ಮತ್ತು ಬೋಧನಾ ಹಾಗೂ ಕಲಿಕಾ ಸಾಮಗ್ರಿಗಳ ತಯಾರಿಯಲ್ಲಿಯೂ ಭಾಗಿಯಾಗಬೇಕು.

ಶಿಕ್ಷಕರೊಬ್ಬರು ಇಂತಹ ಬಹುಮುಖ ಪಾತ್ರಗಳನ್ನು ನಿರ್ವಹಿಸಬೇಕಾದರೆ ಅವರಿಗೆ ಪಠ್ಯಕ್ರಮ, ವಿಷಯ ಜ್ಞಾನ, ಶಿಕ್ಷಣಶಾಸ್ತ್ರದ ಜೊತೆಗೆ ಸಮುದಾಯ, ಶಾಲಾ ವ್ಯವಸ್ಥೆ ಮತ್ತು ಆಡಳಿತದ ಬಗೆಗೂ ಸಮಗ್ರ ಅರಿವು ಇರಬೇಕಾಗುತ್ತದೆ. ಸಮನ್ವಯಕಾರ ಮತ್ತು ಸುಗಮಕಾರ ಕೆಲಸಗಳಂತಹ ಬೋಧನಾ ಪಾತ್ರಗಳ ಜೊತೆಗೆ ಶಿಕ್ಷಕರು ಇಂದು ಶಿಕ್ಷಣಾರ್ಥಿ, ಸಲಹೆಗಾರ, ವ್ಯವಸ್ಥಾಪಕ, ಮೌಲ್ಯಮಾಪಕ ಮತ್ತು ಪ್ರವರ್ತಕರಾಗಿಯೂ ಕಾರ್ಯನಿರ್ವಹಿಸುತ್ತಿದ್ದಾರೆ.

**ಶಿಕ್ಷಣಾರ್ಥಿಯಾಗಿ ಶಿಕ್ಷಕರು**

ಒಬ್ಬ ಶಿಕ್ಷಕನನ್ನು ನಿರಂತರ ಶಿಕ್ಷಣಾರ್ಥಿ ಎಂದು ಪರಿಗಣಿಸಲಾಗುತ್ತದೆ. ಭಾರತ ಮತ್ತು ಇತರೆಡೆಗಳಲ್ಲಿ, ಬೋಧನೆಯಲ್ಲಿ ವೃತ್ತಿಪರ ಪದವಿ ಪಡೆದವರನ್ನು ಶಾಲೆಗಳಲ್ಲಿ ಶಿಕ್ಷಕರಾಗಿ ನೇಮಕ ಮಾಡಿಕೊಳ್ಳಲಾಗುತ್ತದೆ. ನೇಮಕಾತಿಯ ಬಳಿಕ ಶಿಕ್ಷಕರು ನಾನಾ ರೀತಿಯ ತರಬೇತಿಗಳನ್ನು ಪಡೆದುಕೊಳ್ಳುತ್ತಾರೆ. ಇವುಗಳಲ್ಲಿ ಬಹಳಷ್ಟು ಸರಕಾರಿ ಶಾಲೆಗಳಲ್ಲಿ ಕಡ್ಡಾಯವಾಗಿದ್ದರೆ ಖಾಸಗಿ ಶಾಲೆಗಳಲ್ಲಿ ಐಚ್ಛಿಕವಾಗಿದೆ. ಆದರೆ ಈ ಸೇವಾಪೂರ್ವ ಮತ್ತು ಸೇವಾ ಅವಧಿಯಲ್ಲಿ ದೊರೆಯುವ ತರಬೇತಿ, ಶಿಕ್ಷಕರಲ್ಲಿ ನಿರಂತರ ಕಲಿಕಾ ಸ್ಫೂರ್ತಿಯನ್ನು ಬೇರೂರುವಂತೆ ಮಾಡುತ್ತದೆಯೇ ಎಂಬುದು ಪ್ರಶ್ನೆ. ಈ ವರ್ಷ ಸೇವಾವಧಿಯ ಶಿಕ್ಷಕರು ಪಿಐಎನ್‌ಡಿಐಸಿಎಸ್ (ಪ್ರಾಥಮಿಕ ಶಾಲಾ ಶಿಕ್ಷಕರ ಸಾಧನೆಯ ಸೂಚಕದ ಸಂಕ್ಷಿಪ್ತ ರೂಪ) ತರಬೇತಿ ಪಡೆಯುವುದನ್ನು ಕಡ್ಡಾಯ ಮಾಡಲಾಗಿದೆ ಎನ್ನುತ್ತಾರೆ ಉತ್ತರಾಖಂಡದ ಉಧಮ್ ಸಿಂಗ್ ನಗರದಲ್ಲಿರುವ ಜಿಲ್ಲಾ ಶೈಕ್ಷಣಿಕ ತರಬೇತಿ ಸಂಸ್ಥೆ (ಡಯಟ್)ಯ ಹಿರಿಯ ಬೋಧಕ ಪಿ.ಸಿ.ಚಂದೋಲಾ ಅವರು. ತರಬೇತಿಯ ಅವಧಿಯಲ್ಲಿ ಅವಕಾಶ ಕಲ್ಪಿಸಲಾದ ನಾಲ್ಕು ಸೂಚಕಗಳಲ್ಲಿ ಒಂದು ಸ್ವ–ಅಭಿವೃದ್ಧಿ. ಇದರಲ್ಲಿ ಶಿಕ್ಷಕರ ಸ್ವಯಂ–ಕಲಿಕೆಗೆ ಆದ್ಯತೆ ನೀಡಲಾಗುತ್ತದೆ ಎಂದು ಹೇಳುತ್ತ ಸ್ಟೀವ್ ಜಾಬ್ಸ್ ಅವರ 'ಸ್ಟೇ ಹಂಗ್ರಿ, ಸ್ಟೇ ಫೂಲಿಶ್' (ಸದಾ ಹಸಿವಿನಿಂದಿರು, ಸದಾ ಮೂರ್ಖನಾಗಿರು) ಎಂಬ ಜನಪ್ರಿಯ ನುಡಿಯನ್ನು ಪ್ರಸ್ತಾಪಿಸಿದರು. ಕಾಲಾನುಕ್ರಮದಲ್ಲಿ ಪಠ್ಯಕ್ರಮ, ವಿಷಯ ಮತ್ತು ನಂಬಿಕೆಗಳು ಬದಲಾಗುತ್ತಲೇ ಇರುವುದರಿಂದ ಕಲಿಕಾ ಸಿದ್ಧತೆಯಲ್ಲಿ ತೊಡಗಿಕೊಳ್ಳುವ ತುಡಿತ ಸದಾ ಇರಬೇಕಾಗುತ್ತದೆ ಎಂದು ಸೇರಿಸಿದರು.

ಇದ್ದಕ್ಕೆ ವಿರುದ್ಧವಾಗಿ, ಬಹಳಷ್ಟು ವಿದ್ಯಾರ್ಥಿಗಳು ಮಾಹಿತಿ ತಂತ್ರಜ್ಞಾನದ ಸಾಧನಗಳೊಂದಿಗೆ ಸನ್ನದ್ಧರಾಗಿ ತರಗತಿಗಳಲ್ಲಿ ಶಿಕ್ಷಕರಿಗೆ ಬಹುದೊಡ್ಡ ಸವಾಲನ್ನು ಒಡ್ಡುತ್ತಿದ್ದಾರೆ. ಭಾರತದಲ್ಲಿ ಖಾಸಗಿ ಶಾಲೆಗಳ ದೊಡ್ಡ ಸಮೂಹವನ್ನೇ ಹೊಂದಿರುವ ಬಿಹಾರದ ಪಟ್ನಾ ಮೂಲದ ಶಾಲೆಯಲ್ಲಿ ಭೂಗೋಳಶಾಸ್ತ್ರದ ಪಾಠ ಮಾಡುವ ಶಿಕ್ಷಕ ಸಲಾಹುದ್ದಿನ್ ಅಹ್ಮದ್ ಕೂಡ ಇದೇ ಮಾತನ್ನು ಹೇಳುತ್ತಾರೆ. ಇಂದಿನ ದಿನಗಳಲ್ಲಿ ವಿದ್ಯಾರ್ಥಿಗಳು ಅತ್ಯಂತ ಸುಲಭವಾಗಿ ಅಂತರ್ಜಾಲ ಸಂಪರ್ಕ ಹೊಂದುತ್ತಿರುವುದೇ ಶಿಕ್ಷಕರ ಪಾಲಿಗೆ ದೊಡ್ಡ ಸವಾಲಾಗಿ ಪರಿಣಮಿಸಿದೆ. ಇದರ ಪರಿಣಾಮವಾಗಿಯೇ ವಿಷಯ ಜ್ಞಾನದ ಕೊರತೆ ಮತ್ತು ವಿವಿಧ ಶಿಕ್ಷಣಶಾಸ್ತ್ರದ ಸಾಧನಗಳ ಅರಿವಿರದ ಶಿಕ್ಷಕರು ತಮ್ಮ ತರಗತಿಯ ಮೇಲೆ ನಿಯಂತ್ರಣವನ್ನು ಕಳೆದುಕೊಳ್ಳುತ್ತಿದ್ದಾರೆ. ವಿದ್ಯಾರ್ಥಿಯೊಬ್ಬನ ಪ್ರಶ್ನೆಯನ್ನು ಸಮರ್ಪಕವಾಗಿ ನಿಭಾಯಿಸಿದರೆ ಮಾತ್ರ ವಿದ್ಯಾರ್ಥಿಗಳು ತರಗತಿಯಲ್ಲಿ ಆಸಕ್ತಿಯನ್ನು ಹೊಂದುತ್ತಾರೆಂದು, ಆಗ ಯಾವುದೇ ಗೊಂದಲ ಉಂಟಾಗುವುದಿಲ್ಲ ಎಂದೂ ಸೇರಿಸದರು.

ಬಹಳ ವರ್ಷಗಳ ಹಿಂದೆಯೇ, ಟೊರೊಂಟೋ ವಿಶ್ವವಿದ್ಯಾನಿಲಯದ ಒಂಟಾರಿಯೋ ಶೈಕ್ಷಣಿಕ ಅಧ್ಯಯನಗಳ ಸಂಸ್ಥೆಯ ನಿವೃತ್ತ ಪ್ರೊಫೆಸರ್ ಮೈಕಲ್ ಫುಲಾನ್ ಮುಂದೊಂದು ದಿನ ಶಿಕ್ಷಕರು ಇಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬರುತ್ತದೆ ಎಂದು ಭವಿಷ್ಯ ನುಡಿದಿದ್ದರು. ಹಾಗಾಗಿ ಶಿಕ್ಷಕರ ವೃತ್ತಿಪರ ಕಲಿಕೆಗಾಗಿ ಒಂದು ಪ್ರಬಲ ಸಾಧನವಾಗಿ ವೃತ್ತಿಪರ ಕಲಿಕಾ ಸಮುದಾಯ (ಪಿಎಲ್‌ಸಿ)ವನ್ನು ರಚಿಸಬೇಕು ಎಂದು ಶಿಫಾರಸ್ಸು ಮಾಡಿದ್ದರು.

**ಆಪ್ತಸಲಹೆಗಾರರಾಗಿ ಶಿಕ್ಷಕರು**

ಪಠ್ಯಕ್ರಮ, ಸಿಲಬಸ್ ಮತ್ತು ಪಠ್ಯಪುಸ್ತಕಗಳ ಮೇಲಿನ ನ್ಯಾಷನಲ್ ಫೋಕಸ್ ಗ್ರೂಪ್‌ನ ನಿಲುಮೆ ಪ್ರಬಂಧದ ಪ್ರಕಾರ, ಸಮಕಾಲೀನ ಭಾರತದಲ್ಲಿ ಪ್ರೌಢಾವಸ್ಥೆಯ ಕುರಿತ ಅಧ್ಯಯನದಿಂದ ಅನೇಕ ಹೊಸ ಸವಾಲುಗಳು ಅನಾವರಣಗೊಂಡಿವೆ. ಸಾಮಾಜಿಕ ಗುಣಲಕ್ಷಣಗಳೇ ಪರಿವರ್ತನೆಯಲ್ಲಿ ಇರುವುದರಿಂದ ಅದು ಖಾಸಗಿಯಾಗಿಯೂ ಸಾಮಾಜಿಕವಾಗಿಯೂ ಪ್ರಕ್ಷುಬ್ಧತೆಗೆ ದಾರಿ ಮಾಡಿಕೊಟ್ಟಿದೆ. ಹಾಗಾಗಿ ಶಿಕ್ಷಕರು ಬಾಲ್ಯಾವಸ್ಥೆ ಮತ್ತು ಪ್ರೌಢಾವಸ್ಥೆಯ ಸಾಮಾಜಿಕ ರಚನೆಯಲ್ಲಿ ತೊಡಗಿಸಿಕೊಳ್ಳಬೇಕಾದ ಅಗತ್ಯವಿದೆ ಎಂದು ಅದು ಪ್ರತಿಪಾದಿಸಿದೆ. ಇಂತಹ ಕಳವಳಕಾರಿ ಪರಿಸ್ಥಿತಿಯತ್ತ ಗಮನ ಹರಿಸಿದಾಗ ಶಿಕ್ಷಕರು ಯಾವ ರೀತಿಯ ಪಾತ್ರ ನಿರ್ವಹಿಸಲು ಸಾಧ್ಯ ಎಂದು ಆಲೋಚಿಸಬಹುದು? ತಂತ್ರಜ್ಞಾನ ಸುಲಭವಾಗಿ ಕೈಗೆಟಕುತ್ತಿರುವುದರಿಂದ ವಿದ್ಯಾರ್ಥಿಗಳು ಬಹುಬೇಗ ಅದಕ್ಕೆ ದಾಸರಾಗುತ್ತಿದ್ದಾರೆ. ಈಗಿನ ವಿದ್ಯಾರ್ಥಿಗಳಿಗೆ ಸೈಬರ್‌ಕೆಫೆಗಳಲ್ಲಿ ಲೈಂಗಿಕ ವಿಡಿಯೋಗಳು ಬಹಳ ಸುಲಭವಾಗಿ ಮತ್ತು ಅಗ್ಗದಲ್ಲಿ ಲಭ್ಯವಾಗುತ್ತಿದೆ ಎನ್ನುತ್ತಾರೆ ಮುಂಬೈನ ಮನ್‌ಖುರ್ದ್ ರೈಲ್ವೇ ನಿಲ್ದಾಣದ ಬಳಿ ಪುರಸಭಾ ಶಾಲೆಯಲ್ಲಿ ಶಿಕ್ಷಕರಾಗಿರುವ ಮುಲ್ಲಾ ಆದಂ. ಹಿಂದೆಲ್ಲ 18 ವರ್ಷ ವಯಸ್ಸಿನ ಒಳಗಿನ ಮಕ್ಕಳು ಚಿತ್ರಮಂದಿರಗಳಲ್ಲಿ ವಯಸ್ಕರ ಚಿತ್ರವನ್ನು ನೋಡಲು ನಿರ್ಬಂಧವಿತ್ತು. ಆದರೀಗ ತಂತ್ರಜ್ಞಾನದ ದುರ್ಬಳಕೆಯಿಂದಾಗಿ ಆ ಮಿತಿಗಳು ಇಲ್ಲವಾಗಿವೆ. ಒಬ್ಬ ಶಿಕ್ಷಕನಾಗಿ ಇಂತಹ ವಿಷಯಗಳ ಬಗ್ಗೆ ಶಾಲೆಗಳಲ್ಲಿ ಮುಕ್ತವಾಗಿ ಮಾತುಕತೆ ನಡೆಸುವುದು ಮತ್ತು ವಿದ್ಯಾರ್ಥಿಗಳ ಜೊತೆ ಆಪ್ತ ಸಮಾಲೋಚನೆ ನಡೆಸುವುದು ಕಡ್ಡಾಯವಾಗಿ ಮಾಡಬೇಕಾಗಿದೆ ಎನ್ನುತ್ತಾರೆ ಅವರು. ಅವರ ಪ್ರಕಾರ ಶಾಲಾ ವಿದ್ಯಾರ್ಥಿಗಳಿಗೆ ತಂತ್ರಜ್ಞಾನವನ್ನು ಬಳಕೆ ಮಾಡುವ ರೀತಿಯನ್ನು ಸೂಕ್ಷ್ಮವಾಗಿ ತಿಳಿಸಿಕೊಡುವ ಅವಶ್ಯಕತೆಯಿದೆ. ಇದರಿಂದ ಅಪ್ರಾಪ್ತ ವಯಸ್ಕರಿಂದ ಆಗಬಹುದಾದ ಅಪರಾಧಗಳನ್ನು ತಗ್ಗಿಸಬಹುದು ಎಂಬುದು ಅವರ ಯೋಚನೆ.

ಇತರ ಶಾಲೆಗಳಲ್ಲಿಯೂ ಶಿಕ್ಷಕರು ಆಪ್ತಸಮಾಲೋಚನೆಯನ್ನು ನಡೆಸಲು ಅವಕಾಶವಿದೆಯೇ ಎಂಬುದನ್ನು ಪರಿಗಣಿಸೋಣ. ಸರಕಾರಿ ಶಾಲೆಗಳಿಗೆ ಹೋಲಿಸಿದರೆ ಈ ವಿಚಾರದಲ್ಲಿ ಖಾಸಗಿ ಶಾಲೆಗಳಿಗೆ ಕೆಲವು ಮಿತಿಗಳಿವೆ. ಈಗ ಖಾಸಗಿ ಶಾಲೆಗಳ ಹೆಚ್ಚಿನ ಗಮನ ಕಲಿಕಾ ಪ್ರಕ್ರಿಯೆಯನ್ನು ಯಾಂತ್ರೀಕರಣಗೊಳಿಸುವ ಕಡೆಗಿದೆ ಎನ್ನುತ್ತಾರೆ ಸಲಾಹುದ್ದೀನ್. ಶಾಲೆಗಳಲ್ಲಿ ಸ್ಮಾರ್ಟ್ ಕ್ಲಾಸ್‌ಗಳ ಉದಯವಾಗಿರುವುದರಿಂದ ವಿದ್ಯಾರ್ಥಿ–ಶಿಕ್ಷಕರ ನಡುವಿನ ಸಂಬಂಧದ ಮೇಲೆ ಇದು ಪ್ರತಿಕೂಲ ಪರಿಣಾಮ ಬೀರಿದೆ. ವಿದ್ಯಾರ್ಥಿಗಳೊಂದಿಗೆ ಶಿಕ್ಷಕರು ನಡೆಸುವ ಸಮಾಲೋಚನೆ ಕಡಿಮೆಯಾಗಿದೆ. ಈ ಹಿಂದೆ ಖಾಸಗಿ ಹಾಗೂ ಸಾಮಾಜಿಕ ಗೊಂದಲಗಳಿಗೆ ಒಳಗಾದ ವಿದ್ಯಾರ್ಥಿಗಳ ಜತೆಗೆ ಮಾತನಾಡಿ ಸಲಹೆ ನೀಡುವ ಅವಕಾಶ ಶಿಕ್ಷಕರಿಗಿತ್ತು. ಇಂದು ಕೆಲವು ಶಾಲೆಗಳು ಬಹುರಾಷ್ಟ್ರೀಯ ಸಂಸ್ಥೆಗಳಂತೆ ಕಾರ್ಯ ನಿರ್ವಹಿಸುತ್ತಿರುವುದರಿಂದ ಇವುಗಳನ್ನು ಕಾಣುವುದು ಅಪರೂಪವಾಗಿದೆ.

**ವ್ಯವಸ್ಥಾಪಕರಾಗಿ ಶಿಕ್ಷಕ**

ವ್ಯಸ್ಥಾಪಕ ಎಂದರೆ ಒಬ್ಬ ವ್ಯಕ್ತಿ ನಿರ್ಧಾರಗಳನ್ನು ಕೈಗೊಳ್ಳುವ ಹಾಗೂ ಪರಿಸ್ಥಿತಿಗೆ ಅಗತ್ಯವಾದ ಬದಲಾವಣೆಗಳನ್ನು ತರುವ ನಿಟ್ಟಿನಲ್ಲಿ ಇರಬೇಕಾದ ಜ್ಞಾನವುಳ್ಳವರು ಎಂದು ವ್ಯಾಖ್ಯಾನಿಸಬಹುದು. ಈ ಮೊದಲು ಇದು ಬೋಧನೆಯ ಮೂರು ಹಂತಗಳಾದ ಬೋಧನಾ ಪೂರ್ವ, ಬೋಧನೆ ಮತ್ತು ಬೋಧನೆಯ ನಂತರದ ಅವಧಿ ಎಂಬ ಮಿತಿಯೊಳಗೆ ಇರುತ್ತಿತ್ತು. ಆದರೆ ಇಂದು, ಅನೇಕ ಬೋಧಕೇತರ ಚಟುವಟಿಕೆಗಳೂ ಈ ವ್ಯಾಪ್ತಿಯೊಳಗೆ ಸೇರಿಕೊಂಡಿವೆ. ಶಾಲಾ ಶಿಕ್ಷಕರು ಇಂದಿನ ದಿನಗಳಲ್ಲಿ ಗ್ರಾಮೀಣ

ಅಭಿವೃದ್ಧಿ ಯೋಜನೆಗಳ ಮಾಹಿತಿ ಸಂಗ್ರಹ, ರಾಷ್ಟ್ರೀಯ ಜನಗಣತಿ, ಚುನಾವಣಾ ಕೆಲಸ ಹಾಗೂ ಇನ್ನಿತರ ಪ್ರಚಾರಕ್ಕೆ ಸಂಬಂಧಿಸಿದಂತೆ ಬೋಧಕೇತರ ಕೆಲಸಗಳನ್ನು ಮಾಡಬೇಕಾಗಿ ಬಂದಿರುವ ಈ ವಾಸ್ತವದ ಬಗ್ಗೆ 2005ರ ಎನ್‌ಸಿಎಫ್ ವಿಷಾದ ವ್ಯಕ್ತಪಡಿಸಿದೆ. ಜಿಲ್ಲಾಡಳಿತ ವಹಿಸುವ ಇಂತಹ ಕೆಲಸಗಳಿಂದ ಶಿಕ್ಷಕರು ತರಗತಿಗಳಿಂದ ಸದಾ ದೂರವಿರಬೇಕಾದ ಪರಿಸ್ಥಿತಿ ಬಂದಿದೆ. ಇದು ಶಿಕ್ಷಕರ ವೃತ್ತಿ ನಿರ್ವಹಣೆಯಲ್ಲಿ ಆಗುವ ಲೋಪವನ್ನು ಸಾಧನೆಯೆಂಬಂತೆ ಬಿಂಬಿಸಿ ಅದಕ್ಕೆ ಮಾನ್ಯತೆಯನ್ನೂ ಒದಗಿಸುತ್ತಿದೆ.

ಉತ್ತರಾಖಂಡ್‌ನ ಅಲ್ಮೋರಾ ಜಿಲ್ಲೆಯ ಚೌರಿಕಲಿಖಾನ್ ಗ್ರಾಮದಲ್ಲಿ ಮುಖ್ಯೋಪಾಧ್ಯಾಯರಾಗಿರುವ ಶಿವ್ ದತ್ತ ತಿವಾರಿ ಅವರು ಕೂಡ ಇಂತಹುದೇ ಕಳಕಳಿಯನ್ನು ವ್ಯಕ್ತಪಡಿಸುತ್ತಾರೆ. ವಿದ್ಯಾರ್ಥಿಗಳೆಡೆಗಿನ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತ, ಇಲ್ಲಿನ ಮಕ್ಕಳು ಕಲಿಯಲೆಂದು ಕಡಿದಾದ ಬೆಟ್ಟಗುಡ್ಡಗಳನ್ನು ಹತ್ತಿ ಶಾಲೆಗೆ ಬರುತ್ತಾರೆ ಆದರೆ ಶಿಕ್ಷಕರು ಮಾತ್ರ ಡಜನ್‌ಗಟ್ಟಲೆ ರಿಜಿಸ್ಟರ್‌ಗಳನ್ನು ಭರ್ತಿ ಮಾಡುವುದರಲ್ಲಿ ತಲ್ಲೀನರಾಗಿರುತ್ತಾರೆ ಎನ್ನುತ್ತಾರೆ. ಶಿಕ್ಷಕರ ಬೋಧಕೇತರ ಚಟುವಟಿಕೆಗಳು ವಿದ್ಯಾರ್ಥಿಗಳ ಸಮಯವನ್ನು ಕಸಿಯುತ್ತಿದ್ದು ಮಕ್ಕಳ ಭವಿಷ್ಯವನ್ನು ಅಪಾಯಕ್ಕೆ ಸಿಲುಕಿಸುತ್ತಿವೆ ಎನ್ನುತ್ತಾರೆ. ಮಧ್ಯಾಹ್ನದ ಬಿಸಿಯೂಟಕ್ಕೆ ದಿನಸಿಗಳನ್ನು ತರುವುದು, ಆರೋಗ್ಯಕ್ಕೆ ಸಂಬಂಧಿಸಿದ ಮಾತ್ರೆಗಳನ್ನು ಒದಗಿಸುವುದು, ವಿದ್ಯಾರ್ಥಿಗಳ ವಿದ್ಯಾರ್ಥಿವೇತನದ ಮೊತ್ತವನ್ನು ಬ್ಯಾಂಕಿನಲ್ಲಿ ಠೇವಣಿ ಇಡುವುದು ಮತ್ತು ತೆಗೆಯುವುದು, ಕ್ಲಸ್ಟರ್ ಸಂಪನ್ಮೂಲ ಕೇಂದ್ರದಿಂದ ಪಠ್ಯಪುಸ್ತಕಗಳ ಸಂಗ್ರಹ, ವಿದ್ಯಾರ್ಥಿಗಳ ಆಧಾರ್ ಕಾರ್ಡ್ ನೋಂದಣಿ, ನಿರ್ಮಾಣ ಮತ್ತು ಚುನಾವಣಾ ಕೆಲಸಗಳು, ತರಬೇತಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಶಿಕ್ಷಕರ ಇನ್ನಿತರ ಚಟುವಟಿಕೆಗಳು. ಸರ್ವಶಿಕ್ಷಾ ಅಭಿಯಾನದಂತಹ ಯೋಜನೆಗಳು ಆರಂಭವಾದ ನಂತರ ಶಾಲಾ ಶಿಕ್ಷಣದ ಗುಣಮಟ್ಟ ಅಧೋಗತಿಗೆ ಇಳಿಯಲು ಮುಖ್ಯ ಕಾರಣ ಶಿಕ್ಷಕರ ನಿರಂತರ ಬೋಧಕೇತರ ಕೆಲಸಗಳ ಹೆಚ್ಚಳ ಎಂದು ತಿವಾರಿ ವಿವರಿಸುತ್ತಾರೆ.

**ಮೌಲ್ಯಮಾಪಕನಾಗಿ ಶಿಕ್ಷಕ**

2009ರ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾಯ್ದೆ (ಆರ್‌ಟಿಇ)ಯನ್ನು ಜಾರಿಗೆ ತಂದ ಬಳಿಕ, ಅನೇಕ ರಾಜ್ಯಗಳಲ್ಲಿ ಶಿಕ್ಷಕರು ಹೇಳುವ ಪ್ರಕಾರ 'ದೈಹಿಕ ಶಿಕ್ಷೆ ಕೊಡದಿರುವುದು' ಹಾಗೂ 'ನಪಾಸು ಮಾಡದಿರುವುದು' ಎನ್ನುವ ನೀತಿಗಳು ತಮ್ಮ ವೃತ್ತಿಪರ ಹಕ್ಕುಗಳ ಮೇಲಿನ ಉಲ್ಲಂಘನೆಯಾಗಿದೆ ಹಾಗೂ ಇದರಿಂದಾಗಿ ಅವರ ಕೆಲಸ ಇನ್ನೂ ಕಠಿಣವಾಗಿದೆ ಎಂದು. ದುರಾದೃಷ್ಟಕರವಾಗಿ 'ನಪಾಸು ಮಾಡದಿರುವುದು' ಎನ್ನುವ ನೀತಿ ಹಾಗೂ ಸಿಸಿಇ (ನಿರಂತರ ಸಮಗ್ರ ಮೌಲ್ಯಮಾಪನ)ಯನ್ನು ಶಿಕ್ಷಕರ ಕಲ್ಪನೆಗೆ ಬಿಡಲಾಗಿದೆ. ಅನೇಕ ಶಿಕ್ಷಕರು ನಪಾಸು ಮಾಡದಿರುವುದು ಎನ್ನುವ ನೀತಿಯನ್ನು ಮೌಲ್ಯಮಾಪನ ರಹಿತ ಕಲಿಕಾ ಫಲಿತಾಂಶಕ್ಕೆ ಸಮಾನ ಎಂದು ಹೋಲಿಸುತ್ತಾರೆ. ಇಂತಹ ನಿಬಂಧನೆಗಳು ವಿದ್ಯಾರ್ಥಿಗಳ ಕಲಿಕಾ ಫಲಿತಾಂಶದ ಮೇಲೆ ಗಂಭೀರ ಪರಿಣಾಮ ಬೀರಿದೆ ಎಂಬ ಅಭಿಪ್ರಾಯವೇ ಅಧಿಕವಾಗಿದೆ.

'ನಪಾಸು ಮಾಡದಿರುವುದು' ಎನ್ನುವ ನೀತಿ ಶಿಕ್ಷಕರು ಮತ್ತು ಶಿಕ್ಷಣಾರ್ಥಿಯ ಜವಾಬ್ದಾರಿಯನ್ನು ಕ್ಷೀಣಿಸಿದೆ ಎನ್ನುತ್ತಾರೆ ಸಲಾಹುದ್ದಿನ್. ಈ ಹಿಂದೆ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲೇಬೇಕಾದ ಒತ್ತಡ ವಿದ್ಯಾರ್ಥಿಗಳ ಮೇಲಿತ್ತು. ಆದರೆ ಈಗ ವರ್ಗಾಂಕದ ವ್ಯವಸ್ಥೆ ಬಂದ ಮೇಲೆ ಶೈಕ್ಷಣಿಕ ಮತ್ತು ಶೈಕ್ಷಣಿಕೇತರ ವಿಷಯಗಳನ್ನು

ತೀವ್ರ ಪರಿಶೀಲನೆಗೆ ಒಳಪಡಿಸಲಾಗುತ್ತಿದೆ. ಶಾಲೆಗಳಲ್ಲಿ ನೀಡುವ ಶೇ.70ರಷ್ಟು ವರ್ಗಾಂಕ ಶಿಕ್ಷಕರ ಕೃಪೆಗೆ ಒಳಗಾಗಿರುತ್ತದೆ. ಏಕೆಂದರೆ ಶಾಲಾ ಆಡಳಿತ ಮತ್ತು ಪಾಲಕರಿಬ್ಬರೂ, ಅಭ್ಯರ್ಥಿಗಳಿಗಾಗಿ 10 ಸಿಜಿಪಿಎ ನಿರೀಕ್ಷೆಯಲ್ಲಿರುತ್ತಾರೆ. ಇಷ್ಟೊಂದು ಉನ್ನತ ವರ್ಗಾಂಕವನ್ನು ಪಡೆದ ಬಹುತೇಕ ವಿದ್ಯಾರ್ಥಿಗಳು ಪ್ರೌಢಶಾಲಾ ಹಂತವನ್ನು ತಲುಪಿದಾಗ ಅವರಲ್ಲಿ ವಿಷಯದ ಮೂಲ ಜ್ಞಾನದ ಬಗೆಗೆ ಕೊರತೆ ಎದ್ದು ಕಾಣುತ್ತದೆ. ಇದರಿಂದಾಗಿ ಈ ರೀತಿಯ ಮೌಲ್ಯಮಾಪನವೇ ಮಾಯಾಜಾಲ ಎನ್ನುವಂತಾಗುತ್ತದೆ. ಪಾಲಕರು ದುಬಾರಿ ಶುಲ್ಕಗಳನ್ನು ಪಾವತಿಸಿ ತಮ್ಮ ಮಕ್ಕಳನ್ನು ಖಾಸಗಿ ತರಬೇತಿ ಕೇಂದ್ರಗಳಿಗೆ ಸೇರಿಸುವ ಮೂಲಕ ಈ ಅಂತರವನ್ನು ಸರಿದೂಗಿಸುವ ಪ್ರಯತ್ನ ಮಾಡುತ್ತಾರೆ. ಅಂತಿಮವಾಗಿ ಇಷ್ಟೊಂದು ಭಾರಿ ವೆಚ್ಚದ ಬಳಿಕವೂ ಐಐಟಿ ಪರೀಕ್ಷೆಗಳಲ್ಲಿ ಸಿಗುವ ಯಶಸ್ಸಿನ ಪ್ರಮಾಣ ಕೇವಲ ಶೇಕಡ 5ರಷ್ಟು ಮಾತ್ರ.

**ಪ್ರವರ್ತಕನಾಗಿ ಶಿಕ್ಷಕ**

ಸಾಂಪ್ರದಾಯಿಕವಾಗಿ ಶಿಕ್ಷಕರು ತಮ್ಮ ಕಾಲೇಜು ಶಿಕ್ಷಣ ಮತ್ತು ಶಾಲೆಗಳಲ್ಲಿ ಬಳಸಲಾಗುವ ಪಠ್ಯಪುಸ್ತಕಗಳಿಂದ ವಿಷಯ ಜ್ಞಾನವನ್ನು ಪಡೆದುಕೊಳ್ಳುತ್ತಿದ್ದರು. ಬೋಧನೆ ಮತ್ತು ಕಲಿಕಾ ಸಾಮಗ್ರಿಗಳಾಗಿ (ಟಿಎಲ್ಎಂ) ಪಠ್ಯಪುಸ್ತಕಗಳು, ಕರಿಹಲಗೆ, ಸೀಮೆಸುಣ್ಣ, ಮತ್ತು ಕೆಲವು ಪಟಗಳು ಮತ್ತು ಮಾದರಿಗಳನ್ನು ಬಳಸಲಾಗುತ್ತಿದ್ದವು. ಇಂದು ತಂತ್ರಜ್ಞಾನ ಅರಿತ ಶಿಕ್ಷಕರು ಈ ಸಾಮಗ್ರಿಗಳಿಗೆ ಹೊಸ ರೂಪ ನೀಡುತ್ತಿದ್ದಾರೆ. 2005ರ ಎನ್‌ಸಿಎಫ್ ಪ್ರಕಾರ ತಂತ್ರಜ್ಞಾನವನ್ನು ಮಹತ್ತರವಾದ ಗುರಿ ಸಾಧನೆ ಮತ್ತು ಶೈಕ್ಷಣಿಕ ಕಾರ್ಯಕ್ರಮದ ಪ್ರಕ್ರಿಯೆಯ ಉದ್ದೇಶಗಳೊಂದಿಗೆ ಸಂಯೋಜಿಸಬೇಕು. ಅಲ್ಮೋರಾಕ್ಕೆ ಸಮೀಪದ ಮಹತ್‌ಗಾಂವ್ ಗ್ರಾಮದಲ್ಲಿ ಮಾಧ್ಯಮಿಕ ಶಾಲೆಯ ಶಿಕ್ಷಕರಾಗಿರುವ ಸುರೇಶ್ ಚಂದ್ರ ಅವರು ಇತ್ತೀಚೆಗೆ ಶಾಲೆಯ ಕಂಪ್ಯೂಟರ್‌ನಲ್ಲಿ ಪವರ್ ಪಾಯಿಂಟ್ ಮೂಲಕ ಸೂರ್ಯ ಹಾಗೂ ಚಂದ್ರ ಗ್ರಹಣದ ಅನಿಮೇಷನ್ ಸಿದ್ಧಪಡಿಸಿ ಮಕ್ಕಳಿಗೆ ಅದರ ಪರಿಕಲ್ಪನೆಯನ್ನು ವಿವರಿಸಿದ್ದರು. ಇಂತಹ ಒಂದು ಅನಿಮೇಷನ್ ಮೂಲಕ ವಿದ್ಯಾರ್ಥಿಗಳಿಗೆ ಗ್ರಹಣದಿಂದ ಸೂರ್ಯ, ಭೂಮಿ ಮತ್ತು ಚಂದ್ರನಿಗೂ ಇರುವ ಸರ್ವೇಸಾಮಾನ್ಯವಾದ ಸಂಬಂಧದ ಜತೆಗೆ ಅಮೂರ್ತ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳಲು ನೆರವಾಗಿದೆ. ಈ ಸಕಾರಾತ್ಮಕ ಕಲಿಕಾ ಫಲಿತಾಂಶದಿಂದ ಪ್ರೇರೇಪಿಸಲ್ಪಟ್ಟು, ಚಿಂದಿಬಟ್ಟೆ ಮತ್ತು ಕಡ್ಡಿಗಳನ್ನು ಬಳಸಿಕೊಂಡು ಪರ್ವತಗಳು, ಕಣಿವೆಗಳು, ನೀರ್ಗಲ್ಲ ಪ್ರದೇಶಗಳು, ನದಿಗಳು, ಉಪನದಿಗಳು, ನದಿ ಮುಖಜ ಭೂಮಿ, ಅಳಿವೆಗಳನ್ನು ಒಳಗೊಂಡ ಹಿಮಾಲಯ ಶ್ರೇಣಿಯ ಮಾದರಿಯೊಂದನ್ನು ತಯಾರಿಸಿದ್ದಾರೆ.

**ಸವಾಲುಗಳನ್ನು ತಗ್ಗಿಸುವ ದಾರಿ**

- ಎನ್‌ಸಿಎಫ್‌ಟಿಇ–2009ರಲ್ಲಿ ಪ್ರಸ್ತಾಪಿಸಲಾದ ಶಿಕ್ಷಕರ ಬಗೆಗಿನ ದೃಷ್ಟಿಕೋನವನ್ನು ಪರಿಗಣಿಸಿದರೆ ಸೇವಾಪೂರ್ವ ತರಬೇತಿಯನ್ನು ಕೂಲಂಕುಷವಾಗಿ ಪರಿಶೀಲಿಸಬೇಕಾದ ಅಗತ್ಯವಿದೆ. ಶಾಲೆ ಹಾಗೂ ಪ್ರಮಾಣಪತ್ರ ಆಧರಿಸಿದ ಪರೀಕ್ಷೆ ಈ ಎರಡರ ಬಗ್ಗೆಯೂ ಶಿಕ್ಷಕರ ಸೀಮಿತ ತಿಳುವಳಿಕೆ ಜ್ಞಾನದ ಮಟ್ಟಿಗೆ ಹಾನಿಕಾರಕ. ಈ ಎರಡೂ ವಿಷಯಗಳ ಆಳ ಹಾಗೂ ಅವಧಿಗಳ ಬಗ್ಗೆ ಇರುವ ಕೊರತೆಯು ಈಗಾಗಲೇ ಸಾಕಷ್ಟು ಟೀಕೆಗಳಿಗೆ ಗುರಿಯಾಗಿದೆ. ಒಂದು ರಾಷ್ಟ್ರವಾಗಿ ಈ ವೃತ್ತಿಗೆ ಪರಿಣಿತರನ್ನು ಆಯ್ಕೆ ಮಾಡುವ ಜಾವಾಬ್ದಾರಿಗೆ ನಾವು ಬದ್ಧರಾಗಬೇಕಾಗಿದೆ.
- ಒಂದು ಮಗುವಿನ ಜೀವನದ ಅಮೂಲ್ಯವಾದ ಸಮಯವನ್ನು ನಾವು ಅತ್ಯಂತ ಅನುಭೂತಿ ಮತ್ತು ಕಾಳಜಿಯಿಂದ ಅರ್ಥ ಮಾಡಿಕೊಳ್ಳಬೇಕಾಗಿದೆ. ಇದಕ್ಕೆ ನಿರಂತರ ಪರಿಶ್ರಮ ಮತ್ತು ತೀವ್ರವಾದ ಉತ್ಸಾಹದ ಅಗತ್ಯವಿದೆ. ಒಬ್ಬ ಶಿಕ್ಷಕನಿಗೆ ಬಾಲ್ಯಾವಸ್ಥೆ ಮತ್ತು ಪ್ರೌಢಾವಸ್ಥೆಯ ಸಂಪೂರ್ಣ ಅರಿವು

ಇದ್ದಾಗಲಷ್ಟೇ, ವಿದ್ಯಾರ್ಥಿಯ ಖಾಸಗಿ ಮತ್ತು ಸಾಮಾಜಿಕ ಜೀವನದಲ್ಲಿ ಎದುರಿಸುವ ಸವಾಲುಗಳನ್ನು ಅರ್ಥಮಾಡಿಕೊಂಡು ಅವುಗಳನ್ನು ಪರಿಹರಿಸಲು ಸಹಾಯ ಮಾಡಲು ಸಾಧ್ಯವಾಗುತ್ತದೆ.

- ಸ್ಪರ್ಧಾತ್ಮಕ ಪರೀಕ್ಷೆಗಾಗಿ ನಡೆಸುವ ಓಟ ಜೀವನೋಪಾಯದ ಬಗ್ಗೆ ಇರುವ ಅರಿವು ಮತ್ತು ಅವಕಾಶಗಳ ಕೊರತೆಯನ್ನು ಎತ್ತಿ ತೋರಿಸುತ್ತದೆ. ಶಾಲೆಗಳು ಮಗುವಿನ ಶಿಕ್ಷಣವನ್ನು ಪ್ರಮಾಣೀಕರಿಸಬಹುದು. ಆದರೆ ನಮ್ಮ ದೇಶದ ಸಂವಿಧಾನ ಖಾತರಿಪಡಿಸುವ ಗೌರವಯುತ ಮತ್ತು ಯೋಗ್ಯ ಬದುಕಿನ ಬಗ್ಗೆ ಭರವಸೆ ನೀಡುವಲ್ಲಿ ವಿಫಲವಾಗಿದೆ. ಶಾಲಾ ವಿದ್ಯಾರ್ಥಿಗಳಲ್ಲಿ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವ ಸಾಧ್ಯತೆಗಳ ಬಗ್ಗೆ ನಾವು ಚಿಂತಿಸಬೇಕಾಗಿದೆ.
- ಆರ್ಥಿಕ ಹಾಗೂ ತಾಂತ್ರಿಕ ಪ್ರಗತಿಯ ಹೊರತಾಗಿಯೂ ಶಾಲೆ ತೊರೆಯುವ ವಿದ್ಯಾರ್ಥಿಗಳ ಸಂಖ್ಯೆ ಈಗಲೂ ದೊಡ್ಡದಿದೆ. ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಹಿಂದುಳಿದಿರುವ ಪರಿಶಿಷ್ಟ ಜಾತಿ ಮತ್ತು ಪಂಗಡಗಳು, ಅಲ್ಪಸಂಖ್ಯಾತರು ಮತ್ತು ಇತರ ಸಮುದಾಯ, ಹೆಣ್ಣುಮಕ್ಕಳು ಮತ್ತು ವೈವಿಧ್ಯಮಯ ಕಲಿಕೆಯ ಅಗತ್ಯವಿರುವ ಮಕ್ಕಳನ್ನು ಸಾಮಾಜಿಕವಾಗಿ ಬಹಿಷ್ಕರಿಸುವ ಕಪಟ ವ್ಯವಸ್ಥೆಯ ಬಗ್ಗೆ ಎನ್‌ಸಿಎಫ್–2005 ಕಳವಳ ವ್ಯಕ್ತಪಡಿಸಿದೆ. ಮಕ್ಕಳ ಸಾಮಾಜಿಕ, ಸಾಂಸ್ಕೃತಿಕ ಅಥವಾ ಧಾರ್ಮಿಕ ಹಿನ್ನೆಲೆ ಯಾವುದೇ ಆಗಿದ್ದರೂ ಶಿಕ್ಷಕರು ಪ್ರತಿಯೊಂದು ಮಗುವಿಗೂ ಶಿಕ್ಷಣ ದೊರೆಯುವಂತೆ ಮಾಡಬೇಕು.
- ಶಿಕ್ಷಕರ ಸಾಧನೆಯ ವಿಶ್ಲೇಷಣೆ ಅವರು ಶಾಲೆಯಲ್ಲಿ ಬೋಧನೆಗೆ ನೀಡಿದ ಸಮಯವನ್ನು ಆಧರಿಸಿರಬೇಕು. ಅವರ ಬೋಧಕೇತರ ಚಟುವಟಿಕೆಗಳನ್ನು ವ್ಯವಸ್ಥಿವಾಗಿ ನಿಲ್ಲಿಸಬೇಕು. ಬೋಧನೆಯ ಸದಾಕಾಂಕ್ಷೆ ಮತ್ತು ಮಕ್ಕಳ ಜೀವನವನ್ನು ಪರಿವರ್ತನೆಗೊಳಿಸುವ ಏಕಮಾತ್ರ ಉದ್ದೇಶ ಶಿಕ್ಷಕರದ್ದಾಗಿರಬೇಕು.
- ಚಿಂತನಶೀಲ ವೃತ್ತಿಗಾರರಾಗಿ ಮಾತ್ರ ಶಿಕ್ಷಕರ ಅಭಿವೃದ್ಧಿಯನ್ನು ಅವರ ವೃತ್ತಿಪರ ಯಶಸ್ಸಿನ ಪರಾಕಾಷ್ಠೆ ಎಂದು ಪರಿಗಣಿಸಬೇಕಾಗುತ್ತದೆ. ಆದರೆ ಅವರ ಸ್ವಾಯತ್ತತೆಗೆ ಯಾವುದೇ ಧಕ್ಕೆ ಆಗದಿದ್ದಾಗ ಮಾತ್ರ ಈ ಸಾಧನೆ ಸಾಧ್ಯವಾಗುತ್ತದೆ. ಮಕ್ಕಳ ವಿಭಿನ್ನ ರೀತಿಯ ಅಗತ್ಯಗಳನ್ನು ಪೂರೈಸುವ ವಾತಾವರಣವನ್ನು ಕಲ್ಪಿಸುವ ಜವಾಬ್ದಾರಿಯನ್ನು ಹೊಂದಿರುವ ಶಿಕ್ಷಕರಿಗೆ ಸ್ವಾತಂತ್ರ್ಯ ನೀಡುವುದು ಅತ್ಯಗತ್ಯ ಎಂದು ಎನ್‌ಸಿಎಫ್–2005 ಪ್ರತಿಪಾದಿಸಿದೆ. ಶಿಕ್ಷಣಾರ್ಥಿಗೆ ಅವಕಾಶ, ಸ್ವಾತಂತ್ರ್ಯ, ಹೊಂದಾಣಿಕೆ ಮತ್ತು ಗೌರವ ಹೇಗೆ ಅಗತ್ಯವೋ ಅಷ್ಟೇ ಪ್ರಮಾಣದ ಅಗತ್ಯ ಶಿಕ್ಷಕರಿಗೂ ಇದೆ.

**ಉಲ್ಲೇಖ**


- ಶಿಕ್ಷಕರ ಶಿಕ್ಷಣಕ್ಕಾಗಿ ರಾಷ್ಟ್ರೀಯ ಪಠ್ಯಕ್ರಮದ ಕಾರ್ಯನೀತಿ, ನವದೆಹಲಿ: ಶಿಕ್ಷಕರ ಶಿಕ್ಷಣದ ರಾಷ್ಟ್ರೀಯ ಮಂಡಳಿ, 2009–10
- ಫುಲಾನ್, ಮೈಕೇಲ್ ಮತ್ತು ಗೆರ್ರಿ ಸ್ಮಿತ್. "http://michaelfullan.ca/wpcontent/uploads/2016/06/13396041050.pdf." ಡಿಸೆಂಬರ್ 1999. *michaelfullan.ca.* 12ನೇ ಸೆಪ್ಟೆಂಬರ್2016
- ರಾಷ್ಟ್ರೀಯ ಪಠ್ಯಕ್ರಮದ ಕಾರ್ಯನೀತಿ 2005, ನವದೆಹಲಿ: ಸಂಶೋಧನೆ ಮತ್ತು ತರಬೇತಿ ಕುರಿತ ರಾಷ್ಟ್ರೀಯ ಶೈಕ್ಷಣಿಕ ಮಂಡಳಿ, 2009.
- "http://www.edu.gov.on.ca/eng/literacynumeracy/inspire/

research/PLC.pdf." ಅಕ್ಟೋಬರ್ 2007. *www.edu.gov.on.ca*. 12ನೇ ಸೆಪ್ಟೆಂಬರ್ 2016.

- *Position Paper National Focus Group Curriculum, Syllabus and Textbooks.* ನವದೆಹಲಿ: ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಮಂಡಳಿ, 2006.
- ರಾಮಚಂದ್ರನ್, ವಿಮಲಾ. "ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಶಿಕ್ಷಕರ ಪಾತ್ರ" –ಲರ್ನಿಂಗ್ ಕರ್ವ್ (2016): 50–52
- ಶಿಕ್ಷಕರ ಪಾತ್ರ ಮತ್ತು ಅಭಿವೃದ್ಧಿ. ನವದೆಹಲಿ: ಇಂದಿರಾ ಗಾಂಧಿ ರಾಷ್ಟ್ರೀಯ ಮುಕ್ತ ವಿವಿ, 2004.

ಆಸಿಫ್, ಉತ್ತರಾಖಂಡದ ಅಲ್ಮೋರಾದಲ್ಲಿರುವ ಅಜೀಂ ಪ್ರೇಮ್‌ಜಿ ಪ್ರತಿಷ್ಠಾನದ ಸದಸ್ಯರು. ಪ್ರೌಢಶಾಲೆಯಲ್ಲಿ ಹತ್ತು ವರ್ಷಕ್ಕೂ ಹೆಚ್ಚು ಅವಧಿಗೆ ಒಬ್ಬ ಜೀವಶಾಸ್ತ್ರ ವಿಷಯದಲ್ಲಿ ಮಾಜಿ ಶಿಕ್ಷಕರಾಗಿದ್ದ ಆಸಿಫ್, ಅವರು ಕೆಲಸ ಮಾಡುತ್ತಿದ್ದ ಎರಡು ಶಾಲೆಗಳಲ್ಲಿ ಜವಾಬ್ದಾರಿಯುತ ನಾಯಕತ್ವದ ಸ್ಥಾನಗಳನ್ನು ನಿರ್ವಹಿಸಿದ್ದಾರೆ. ಮಕ್ಕಳಿಗಾಗಿ ಗ್ರಂಥಾಲಯವನ್ನು ಸ್ಥಾಪಿಸುವುದರಿಂದ ಹಿಡಿದು 'ನಾಲೆಡ್ಜ್ – ಸೀಕರ್ಸ್' ಮತ್ತು ಬಯೊ – ಥಿಂಕರ್ಸ್' ಎಂಬ ಹೆಸರಿನ ಯುವ ಸಂಘಟನೆಗಳನ್ನು ಸ್ಥಾಪಿಸುವುದರ ತನಕ ಅವರ ಸ್ವಯಂ–ಸೇವಾ ಕಾರ್ಯದ ವ್ಯಾಪ್ತಿಯು ಹರಡಿದೆ. ಅವರ ಆಸಕ್ತಿಯ ಕ್ಷೇತ್ರಗಳು ವಿಜ್ಞಾನ ಶಿಕ್ಷಕರ ಶಿಕ್ಷಣ ಮತ್ತು ನಾಯಕತ್ವ. ಇವರನ್ನು asif.akhtar@azimpremjifoundation.org ಇಲ್ಲಿ ಸಂಪರ್ಕಿಸಬಹುದು.